

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 172 |
| ಸದಸ್ಯರ ಹೆಸರು | ಶ್ರೀ ಆರ್. ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 22.09.2020. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಶಿವಮೊಗ್ಗ ಜಿಲ್ಲೆಯಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಪರವಾನಿಗೆ ಪಡೆಯದೇ ಗಣಿಗಾರಿಕೆ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಬಂದಿದೆ. |
| ಆ) | ರಾಜ್ಯದಲ್ಲಿ ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಯಾವ ರೀತಿ ಕ್ರಮ ಕೈಗೊಳ್ಳಲಾಗಿದೆ: | ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಎಂ.ಎಂ. (ಡಿ&ಆರ್) 1957ರ ಕಾಯ್ದೆ ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರಂತೆ ಮೊಕದ್ದಮೆಗಳನ್ನು ದಾಖಲಿಸಿ, ದಂಡ ಸಂಗ್ರಹಿಸಲು ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುತ್ತಿದೆ.<br><br>ಕಳೆದ ಮೂರು ವರ್ಷಗಳಲ್ಲಿ ಅನಧಿಕೃತ ಕಲ್ಲು ಮತ್ತು ಮರಳು ಗಣಿಗಾರಿಕೆ ಸಂಬಂಧ ಕೈಗೊಂಡ ಕ್ರಮದ ವಿವರ ಕೆಳಕಂಡಂತಿದೆ: |

**ಮುಖ್ಯ ಖನಿಜ ಗಣಿಗಾರಿಕೆ :-**

| ಕ್ರ. ಸಂ. | ವರ್ಷ | ಪತ್ತೆ ಹಚ್ಚಿದ ಪ್ರಕರಣಗಳು | ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ | ವಸೂಲಾದ ದಂಡ (ರೂ.ಲಕ್ಷಗಳಲ್ಲಿ) |
|---|---|---|---|---|
| 1. | 2017-18 | 01 | - | 0.5 |
| 2. | 2018-19 | 05 | - | 2.0 |
| 3. | 2019-20 | 02 | - | - |

**ಕಲ್ಲುಗಣಿಗಾರಿಕೆ :-**

| ಕ್ರ. ಸಂ. | ವರ್ಷ | ಪತ್ತೆ ಹಚ್ಚಿದ ಪ್ರಕರಣಗಳು | ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ | ವಸೂಲಾದ ದಂಡ (ರೂ.ಲಕ್ಷಗಳಲ್ಲಿ) |
|---|---|---|---|---|
| 1. | 2017-18 | 404 | 114 | 613.25 |
| 2. | 2018-19 | 413 | 108 | 1213.37 |
| 3. | 2019-20 | 266 | 117 | 908.70 |
| **ಒಟ್ಟು** | | **1083** | **339** | **735.32** |

ಮರಳು ಗಣಿಗಾರಿಕೆ:-

| ಕ್ರ. ಸಂ. | ವರ್ಷ | ಪತ್ತೆ ಹಚ್ಚಿದ ಪ್ರಕರಣಗಳು | ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ | ವಸೂಲಾದ ದಂಡ (ರೂ.ಲಕ್ಷಗಳಲ್ಲಿ) |
|---|---|---|---|---|
| 1. | 2017-18 | 286 | 159 | 191.43 |
| 2. | 2018-19 | 191 | 106 | 54.62 |
| 3. | 2019-20 | 217 | 77 | 124.71 |
| **ಒಟ್ಟು** | | **694** | **342** | **370.76** |

| | | |
|---|---|---|
| ಇ) | ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗಿದೆಯೇ; ನಷ್ಟ ಉಂಟಾಗಿದ್ದಲ್ಲಿ, ಎಷ್ಟು ಹಣ ನಷ್ಟವಾಗಿರುತ್ತದೆ. | ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರಿಂದ ಸದರಿ ಗಣಿಗಾರಿಕೆಯಿಂದ ತೆಗೆದಿರುವ ಖನಿಜದ ಪ್ರಮಾಣಕ್ಕೆ ತಗಲುವ ರಾಜಧನದ ಐದು ಪಟ್ಟು ಮೊತ್ತವನ್ನು ದಂಡ ವಿಧಿಸಿ ಸಂಗ್ರಹಿಸಲು ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುತ್ತಿದ್ದು, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗಿರುವುದಿಲ್ಲ. |
| ಈ) | ಮರಳು ಮತ್ತು ಗಣಿಗಾರಿಕೆಗೆ ಅನುಮತಿ ಪಡೆಯಲು ಸರ್ಕಾರದ ಮಾನದಂಡಗಳೇನು? (ಪ್ರತ್ಯೇಕವಾಗಿ ವಿವರ ನೀಡುವುದು) | ಕೇಂದ್ರ ಸರ್ಕಾರವು ದಿನಾಂಕ 20.05.2015 ರಂದು ಜಾರಿಗೆ ತಂದಿರುವ The Mineral (Auction) Rules, 2015 ನಿಯಮಗಳನ್ವಯ ಖನಿಜಯುಕ್ತ ಗಣಿ ಪ್ರದೇಶಗಳನ್ನು ಗುರುತಿಸಿ ಖನಿಜ ನಿಕ್ಷೇಪವನ್ನು ಅಂದಾಜಿಸಿ ಸದರಿ ಪ್ರದೇಶಗಳನ್ನು ಇ-ಹರಾಜು ಮೂಲಕ ಪ್ರಧಾನ ಖನಿಜ ಗಣಿ ಗುತ್ತಿಗೆ ಮಂಜೂರಾತಿ ಮಾಡಲಾಗುತ್ತಿದೆ.<br><br>ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮಗಳಂತೆ ಸರ್ಕಾರಿ ಜಮೀನುಗಳಲ್ಲಿ ಉಪಖನಿಜ ನಿಕ್ಷೇಪಗಳನ್ನು ಗುರುತಿಸಿ ಹರಾಜು ಮೂಲಕ ಉಪಖನಿಜ ಗುತ್ತಿಗೆಗಳನ್ನು ಮಂಜೂರು ಮಾಡಬೇಕಾಗಿರುತ್ತದೆ.<br><br>ಪಟ್ಟಾ ಜಮೀನುಗಳಲ್ಲಿ ಲಭ್ಯವಿರುವ ಖನಿಜವನ್ನು ತೆಗೆಯಲು ಪಟ್ಟಾದಾರರಿಗೆ ಅಥವಾ ಪಟ್ಟಾದಾರರು ಒಪ್ಪಿಗೆ ನೀಡುವ ವ್ಯಕ್ತಿಗಳಿಗೆ ಉಪಖನಿಜ ಗಣಿಗಾರಿಕೆಗೆ ಲೈಸೆನ್ಸ್ ಮಂಜೂರಾತಿ ನೀಡಲಾಗುತ್ತಿದೆ.<br><br>ದಿನಾಂಕ 05.05.2010 ರಂದು 2020 ರ ಹೊಸ ಮರಳು ನೀತಿ ಹಾಗೂ ಇದರ ಅನುಷ್ಠಾನದ ಮಾರ್ಗಸೂಚಿಗಳು ಜಾರಿಗೆ ತಂದಿರುತ್ತದೆ. ಇದರ ಪ್ರಮುಖ ಅಂಶಗಳು ಈ ಕೆಳಕಂಡಂತಿರುತ್ತವೆ.<br><br>➢ I, II ಮತ್ತು IIIನೇ ಶ್ರೇಣಿಯ ಹಳ್ಳ / ತೊರೆ ಮತ್ತು ಕೆರೆಗಳಲ್ಲಿ ಲಭ್ಯವಿರುವ ಮರಳನ್ನು ತೆಗೆಯುವ ಮತ್ತು ವಿಲೇವಾರಿ ಮಾಡುವ **ಸಂಪೂರ್ಣ ಹೊಣೆಗಾರಿಕೆಯನ್ನು** ಸಂಬಂಧಿಸಿದ ಗ್ರಾಮ ಪಂಚಾಯಿತಿಗಳಿಗೆ ವಹಿಸಲಾಗಿದೆ. |

| | | |
|---|---|---|
| | — | ➢ IV, V ಮತ್ತು VIನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಲಭ್ಯವಿರುವ ಮರಳನ್ನು ಮತ್ತು ಅಣೆಕಟ್ಟು / ಜಲಾಶಯ / ಬ್ಯಾರೇಜ್ ಗಳು ಮತ್ತು ಸದರಿ ಹಿನ್ನೀರಿನ ಪ್ರದೇಶಗಳಲ್ಲಿ ಹೂಳು ತೆಗೆಯುವ ಮುಖಾಂತರ ದೊರೆತ ಮರಳನ್ನು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಾದ ಕರ್ನಾಟಕ ಸ್ಟೇಟ್ ಮಿನರಲ್ ಕಾರ್ಪೋರೇಷನ್ ಲಿ., ಮತ್ತು ಹಟ್ಟಿ ಚಿನ್ನದ ಗಣಿ ನಿಯಮಿತ ಇವರಿಗೆ ವಹಿಸಲಾಗಿದೆ.<br>➢ ಗ್ರಾಹಕರಿಗೆ ನಿಗದಿತ ಮತ್ತು ಸುಲಭ ದರದಲ್ಲಿ ಮರಳು ಮಾರಾಟ ಮಾಡಲು ಅವಕಾಶ ಕಲ್ಪಿಸಲಾಗಿದೆ. ಅದರಂತೆ, ಸರ್ಕಾರಿ ಆದೇಶ ಸಂಖ್ಯೆ: ಸಿಐ 344 ಎಂಎಂಎನ್ 2019 (ಭಾಗ-2), ದಿನಾಂಕ 10.07.2020 ರಂತೆ ಗ್ರಾಮ ಪಂಚಾಯಿತಿಯಿಂದ ವಿಲೇವಾರಿ ಮಾಡುವ ಪ್ರತಿ ಮೆಟ್ರಿಕ್ ಟನ್ ಮರಳಿಗೆ ರೂ.300/- ಹಾಗೂ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಿಂದ ವಿಲೇವಾರಿ ಮಾಡುವ ಪ್ರತಿ ಮೆಟ್ರಿಕ್ ಟನ್ ಮರಳಿಗೆ ರೂ.700/-ಗಳನ್ನು ನಿಗದಿಪಡಿಸಲಾಗಿದೆ.<br>➢ I, II ಮತ್ತು IIIನೇ ಕ್ರಮಾಂಕದ ಹಳ್ಳ / ತೊರೆ, ಕೆರೆಗಳಲ್ಲಿನ ಅಧಿಸೂಚಿತ ಮರಳು ನಿಕ್ಷೇಪ ಪ್ರದೇಶಗಳಲ್ಲಿ ತೆಗೆದಂತಹ ಮರಳನ್ನು ಕಡಿಮೆ ಹೇರುಭಾರ ಸಾಮರ್ಥ್ಯದ ವಾಹನಗಳಾದ ಟ್ರಾಕ್ಟರ್, ಎತ್ತಿನಗಾಡಿ ಇತ್ಯಾದಿ ಲಘು ವಾಹನಗಳಲ್ಲಿ ಹೇರುಭಾರ ಸಾಮರ್ಥ್ಯಕ್ಕೆ ಅನುಗುಣವಾಗಿ ತಾಲ್ಲೂಕು ವ್ಯಾಪ್ತಿಯ ಎಲ್ಲಾ ಗ್ರಾಮಗಳಿಗೆ ಮಾತ್ರ ಮರಳು ಸಾಗಾಣಿಕೆಗೆ ಅನುಮತಿ ನೀಡಲು ಅವಕಾಶ ಕಲ್ಪಿಸಲಾಗಿದೆ. |

ಕಡತ ಸಂಖ್ಯೆ: ಸಿಐ 448 ಎಂಎಂಎನ್ 2020

(ಸಿ.ಸಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಸಚಿವರು

ಸಿ.ಸಿ. ಪಾಟೀಲ
ಗಣಿ ಮತ್ತು ಭೂವಿಜ್ಞಾನ ಸಚಿವರು